# ಕರ್ನಾಟಕ ವಿಧಾನಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 541

ಸದಸ್ಯರ ಹೆಸರು : ಶ್ರೀ.ಹೆಚ್.ರಮೇಶ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಕನ್ನಡ ಮತ್ತು ಸಂಸ್ಕೃತಿ ಸಚಿವರು

ಉತ್ತರಿಸಬೇಕಾದ ದಿನಾಂಕ : 11-12-2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಶೈಕ್ಷಣಿಕವಾಗಿ ಹಿಂದುಳಿದಿರುವ ತುಮಕೂರು ಜಿಲ್ಲೆಯ ಸುಮಾರು 846 ಅಂಗನವಾಡಿಗಳಿಗೆ ಸ್ವಂತ ಕಟ್ಟಡವಿಲ್ಲದಿರುವುದು ಹಾಗೂ ಬಹುತೇಕ ಅಂಗನವಾಡಿಗಳು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಹೌದು. |
| ಆ. | ತುಮಕೂರು ಜಿಲ್ಲೆಯ ಸುಮಾರು 1.40 ಲಕ್ಷ ಗ್ರಾಮೀಣ ಪ್ರದೇಶದ ಮಕ್ಕಳು ಕಲಿಯುತ್ತಿರುವ ಅಂಗನವಾಡಿ ಕಟ್ಟಡಗಳಲ್ಲಿ ಶೌಚಾಲಯ, ಕುಡಿಯುವ ನೀರು ಮುಂತಾದ ಮೂಲಭೂತ ಸೌಕರ್ಯಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೇಯೇ; | ಹೌದು. |
| ಇ. | ಬಂದಿದ್ದಲ್ಲಿ ಈ ಅಂಗನವಾಡಿಗಳ ಅಭಿವೃದ್ಧಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ನಿವೇಶನ ರಹಿತ ಅಂಗನವಾಡಿಗಳಿಗೆ ಶೀಘ್ರ ನಿವೇಶನ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಮಾಹಿತಿ ನೀಡುವುದು) | **ಅ)**.ತುಮಕೂರು ಜಿಲ್ಲೆಯಲ್ಲಿ 846 ಅಂಗನವಾಡಿ ಕೇಂದ್ರಗಳಿಗೆ ಸ್ವಂತ/ಸರ್ಕಾರಿ ಕಟ್ಟಡಗಳಿರುವುದಿಲ್ಲ. ನಿವೇಶನ ಮತ್ತು ಅನುದಾನದ ಲಭ್ಯತೆ ಆಧಾರದ ಮೇಲೆ ಕಟ್ಟಡ ನಿರ್ಮಾಣಕ್ಕೆ ಕ್ರಮ ವಹಿಸಲಾಗುವುದು.<br>18 ಕಟ್ಟಡಗಳು ಶಿಥಿಲಾವಸ್ಥೆಯಲ್ಲಿದ್ದು, ಇವುಗಳನ್ನು ಶಾಲೆ/ಬಾಡಿಗೆ ಕಟ್ಟಡಗಳಿಗೆ ವರ್ಗಾಯಿಸಲಾಗಿದೆ.<br><br>**ಆ)**. 134 ಅಂಗನವಾಡಿ ಕೇಂದ್ರಗಳಿಗೆ ಶೌಚಾಲಯ ನಿರ್ಮಾಣ ಮಾಡಲು ಇಲಾಖೆಯಿಂದ ರೂ.12000/- ದಂತೆ ಅನುದಾನ ಬಿಡುಗಡೆಯಾಗಿದ್ದು, ಉಳಿಕೆ ರೂ.28000/- ಗಳನ್ನು ಬಿಡುಗಡೆ ಮಾಡಲು ಸ್ವಚ್ಚ ಭಾರತ ಮಿಷನ್(ಗ್ರಾ) ಇವರನ್ನು ಕೋರಲಾಗಿದೆ. ಜಲಜೀವನ್ ಮಿಷನ್ ಯೋಜನೆಯಡಿಯಲ್ಲಿ 1512 ಕೇಂದ್ರಗಳಿಗೆ ನೀರಿನ ಸಂಪರ್ಕವನ್ನು ಕಲ್ಪಿಸಲು ಕ್ರಮ ವಹಿಸಲಾಗುತ್ತಿದೆ.<br><br>**ಇ)**.ನಿವೇಶನ ಅಗತ್ಯವಿರುವ 577 ಕೇಂದ್ರಗಳಿಗೆ ನಿವೇಶನ ನೀಡುವಂತೆ ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮುಖಾಂತರ ಎಲ್ಲಾ ತಾಲ್ಲೂಕು ತಹಶೀಲ್ದಾರ್, ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಮುಖ್ಯಾಧಿಕಾರಿಗಳು ನಗರಸಭೆ/ಪುರಸಭೆಗಳಿಗೆ ಕೋರಲಾಗಿದ್ದು, ಈವರೆವಿಗೂ 28 ನಿವೇಶನಗಳನ್ನು ಪಡೆಯಲಾಗಿರುತ್ತದೆ. |

| | | |
|---|---|---|
| ಈ | ಪ್ರಸಕ್ತ ಸಾಲಿನಲ್ಲಿ ಮಹಿಳಾ ಕಲ್ಯಾಣ ಕಾರ್ಯಕ್ರಮಗಳು, ಮಕ್ಕಳ ಕಾರ್ಯಕ್ರಮಗಳು ಹಾಗೂ ಸಾಮಾಜಿಕ ರಕ್ಷಣಾ ಕಾರ್ಯಕ್ರಮಗಳಿಗೆ ಮೀಸಲಿಟ್ಟ ಹಣವೆಷ್ಟು; ಎಷ್ಟು ಹಣ ಬಳಕೆಯಾಗಿದೆ (ಸಂಪೂರ್ಣ ವಿವರ ನೀಡುವುದು) | (see table below) |

| ಕ್ರ. ಸಂ | ಯೋಜನೆ | ಬಿಡುಗಡೆ(ರೂ.ಲಕ್ಷಗಳಲಿ) | ಖರ್ಚು(ರೂ. ಲಕ್ಷಗಳಲಿ) |
|---|---|---|---|
| 1 | ಸ್ತ್ರೀಶಕ್ತಿ (ಹೊ.ಗುಂ.ಸುತ್ತುನಿಧಿ) | 0.95 | 0:95 |
| 2 | ಡಿ.ವಿ.ಆಕ್ಟ್ (ಕಂ.ಆ.ಗೌ.ಧನ) | 11.40 | 11.40 |
| 3 | ಬಾಲ್ಯವಿವಾಹ ನಿಷೇಧ ಕಾಯ್ದೆ | 0.00 | 0.00 |
| 4 | ಪೋಷಣ್ ಅಭಿಯಾನ್ | 76.83 | 12.24 |
| 5 | ಮಾತೃವಂದನ | 20.04 | 20.04 |
| 6 | ಪೂರಕ ಪೌಷ್ಟಿಕ ಆಹಾರ | 4655.16 | 3326.88 |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತುವಿಕಲಚೇತನರ,
ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ :ಮಮಇ 227 ಐಸಿಡಿ 2020